ವೇಮಗಲ್ ಸೋಮಶೇಖರ

# ಪ್ರಥಮ ಮೈಸೂರು (ದಸರಾ) ವಸ್ತುಪ್ರದರ್ಶನ (೧೮೮೮)

ಕ್ರಿಸ್ತಶಕ ೧೮೫೧ರಲ್ಲಿ ವಿಶ್ವದಲ್ಲೇ ಪ್ರಥಮ ಬಾರಿಗೆ ಲಂಡನ್ನಿನಲ್ಲಿ ಬೃಹತ್ ವಸ್ತು ಪ್ರದರ್ಶನವೊಂದು ಮೂರು ತಿಂಗಳು ನಡೆಯಿತು. ಈ ಪ್ರದರ್ಶನಕ್ಕೆ 'ಗ್ರೇಟ್ ಎಕ್ಸಿಬಿಷನ್ ಆಫ್ ದಿ ವರ್ಕ್ಸ್ ಆಫ್ ಇಂಡಸ್ಟ್ರೀ ಆಫ್ ಆಲ್ ನೇಷನ್ಸ್' ಎಂದು ನಾಮಕರಣ ಮಾಡಲಾಗಿತ್ತು. ಈ ಪ್ರದರ್ಶನದ ನಂತರ ವಿಶ್ವದ ಬೇರೆ ಬೇರೆ ಕಡೆಯೂ ಇಂತಹದೇ ವಸ್ತುಪ್ರದರ್ಶನಗಳು ನಡೆಯಲಾರಂಭಿಸಿದವು. ೧೮೮೩–೮೪ರಲ್ಲಿ ಭಾರತದಲ್ಲಿ ಮೊದಲನೆಯ ಬಾರಿಗೆ ಕಲ್ಕತ್ತದಲ್ಲಿ 'ಕಲ್ಕತ್ತ ಇಂಟರ್ ನ್ಯಾಷನಲ್ ಎಕ್ಸಿಬಿಷನ್' ಎಂಬ ವಸ್ತುಪ್ರದರ್ಶನ ನಡೆಯಿತು. ಈ ಎಲ್ಲಾ ಪ್ರದರ್ಶನಗಳಲ್ಲಿಯೂ ಮೈಸೂರು ದೇಶದ ಅನೇಕ ವಸ್ತುಗಳನ್ನು ಪ್ರದರ್ಶಿಸಲಾಗಿತ್ತು.

೧೮೭೭–೭೮ರಲ್ಲಿ ಮೈಸೂರು ಸಂಸ್ಥಾನದಲ್ಲಿ ತಲೆದೋರಿದ ಭೀಕರ ಕ್ಷಾಮದ ಪರಿಣಾಮವಾಗಿ ಸಾವಿರಾರು ಜನರು ಅನ್ನ ನೀರಿಲ್ಲದೆ ಮರಣ ಹೊಂದಿದರು. ಈ ಕಾರಣದಿಂದ ಸರ್ಕಾರದವರು ಅನೇಕ ಯೋಜನೆಗಳನ್ನು ಕೈಗೊಂಡು ಪ್ರಜೆಗಳ ಸ್ಥಿತಿಗತಿಗಳನ್ನು ಸುಧಾರಿಸಲು ಕ್ರಮ ಕೈಗೊಂಡರು. ಸಕಲ ಜನರು ಕೈಕೆಲಸಗಳಲ್ಲಿಯೂ, ಕುಶಲ ವಿದ್ಯೆಗಳಲ್ಲಿಯೂ ಹೊಂದಿರುವ ಅಭಿವೃದ್ಧಿಯನ್ನು ವ್ಯಕ್ತಪಡಿಸಿದರೆ, ಕೈಗಾರಿಕೋದ್ಯಮ, ವ್ಯವಸಾಯೋತ್ಪನ್ನ ಹಾಗೂ ವ್ಯಾಪಾರವೂ ಹೆಚ್ಚಾಗುವುದೆಂದೂ, ಸಾಮಾಜಿಕ ಪರಿಸರವೂ ಸುಧಾರಿಸುವುದೆಂದೂ ಯೋಚಿಸಿ ಕಲ್ಕತ್ತದಲ್ಲಿ ನಡೆದ ಪ್ರದರ್ಶನ ರೀತಿಯಲ್ಲೆ ಮೈಸೂರಿನಲ್ಲಿಯೂ ಒಂದು ವಸ್ತುಪ್ರದರ್ಶನವನ್ನು ೧೮೮೭ರಲ್ಲಿ ಏರ್ಪಾಟು ಮಾಡಿದರು. ಈ ಪ್ರದರ್ಶನಕ್ಕೆ 'ಮೈಸೂರು ಅಗ್ರಿಕಲ್ಚರಲ್ ಅಂಡ್ ಇಂಡಸ್ಟ್ರಿಯಲ್ ಎಕ್ಸಿಬಿಷನ್' ಎಂದೂ ಕನ್ನಡದಲ್ಲಿ 'ಸರ್ವ ವಸ್ತು ಪ್ರದರ್ಶನೋತ್ಸವ' ಎಂದೂ ಕರೆಯಲಾಯಿತು. ಆಗಿನ ಮಹಾರಾಜರಾಗಿದ್ದ ಚಾಮರಾಜೇಂದ್ರ ಒಡೆಯರ್‌ರವರ ವೈಯಕ್ತಿಕ ಶ್ರದ್ಧಾಸಕ್ತಿಗಳೂ ಈ ಪ್ರದರ್ಶನ ನಡೆಯುವುದಕ್ಕೆ ಕಾರಣವಾದವು.

೧೮೮೭ರ ನವಂಬರ್‌ನಲ್ಲಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಫಾರೆಸ್ಟ್ ಅಂಡ್ ಡೈರೆಕ್ಟರ್ ಆಫ್ ಅಗ್ರಿಕಲ್ಚರಲ್ ಇನ್ ಮೈಸೂರು ಆಗಿದ್ದ ಎಲ್. ರಿಕೆಟ್ಸ್ ಅವರೂ ಬಟಾನಿಕಲ್ ಗಾರ್ಡನ್ಸ್ (ಲಾಲ್‌ಬಾಗ್) ಸೂಪರಿಂಟೆಂಡೆಂಟ್ ಆಗಿದ್ದ ಜೆ. ಕ್ಯಾಮರಾನ್ ಅವರೂ ಮತ್ತು ಅಸಿಸ್ಟೆಂಟ್ ಕನ್ಸರ್‌ವೇಟರ್ ಆಫ್ ಫಾರೆಸ್ಟ್ ಆಗಿದ್ದ ಎಸ್. ಎ. ಬಾಪುರಾವ್ ಅವರೂ ಮಹಾರಾಜರಿಗೆ ವಸ್ತುಪ್ರದರ್ಶನ ನಡೆಸುವ ವಿಧಾನಗಳ ಬಗ್ಗೆ ಅಗತ್ಯ ಸಲಹೆಗಳನ್ನು ನೀಡಿದರು. ಅವರು ರೂಪಿಸಿದ ಯೋಜನೆಗಳನ್ನು ಅಲ್ಪಸ್ವಲ್ಪ ಬದಲಾವಣೆ ಮಾಡಿದ ನಂತರ ೩–೫–೧೮೮೮ರಂದು ವಸ್ತುಪ್ರದರ್ಶನದ ಏರ್ಪಾಟಿಗೆ ತಮ್ಮ ಒಪ್ಪಿಗೆ ನೀಡಿದರು.

ಈ ಪ್ರದರ್ಶನದ ವ್ಯವಸ್ಥೆಗೋಸ್ಕರ ಮೂವತ್ನಾಲ್ಕು ಹಿರಿಯ ಅಧಿಕಾರಿಗಳುಳ್ಳ ಒಂದು ಸೆಂಟ್ರಲ್ ಕಮಿಟಿಯನ್ನು ನೇಮಿಸಲಾಯಿತು. ಈ ಕಮಿಟಿಗೆ ಎಲ್. ರಿಕೆಟ್ಸ್ ಅವರು ಅಧ್ಯಕ್ಷರಾಗಿಯೂ ಜೆ. ಕ್ಯಾಮರಾನ್ ಮತ್ತು ಎಸ್.ಎ. ಬಾಪುರಾವ್ ಅವರು ಹಾನೆರರಿ ಜಾಯಿಂಟ್ ಸೆಕ್ರೆಟರಿಗಳಾಗಿಯೂ ನೇಮಿ

ಸಲ್ಪಟ್ಟರು. ಕಮಿಟಿ ಮೆಂಬರುಗಳಾಗಿ ಒಂದೊಂದು ತಾಲೂಕಿಗೆ ಹದಿನೈದು, ಹದಿನಾರು ಜನ ಮುಖ್ಯರಾದ ವರನ್ನು ನೇಮಿಸಲಾಯಿತು. ಇವರ ಸಹಾಯಕ್ಕೆಂದು ತಾಲೂಕು ಸಬ್ ಕಮಿಟಿಗಳನ್ನು ರಚಿಸಲಾಯಿತು.

ಪ್ರದರ್ಶನಕ್ಕೆ ಸಂಬಂಧಿಸಿದ ವಿಷಯಗಳನ್ನು ಕುರಿತು ಸಾರ್ವಜನಿಕರಿಗೆ ತಿಳಿಯಪಡಿಸಲು ಜಾಹಿರಾತು ಕರಪತ್ರಗಳನ್ನು ಇಂಗ್ಲಿಷ್, ಕನ್ನಡ, ತಮಿಳು ಮತ್ತು ತೆಲುಗಿನಲ್ಲಿ ಅಚ್ಚು ಮಾಡಿಸಿ, ಪ್ರಚಾರ ಮಾಡಲು ಪ್ರತಿನಿಧಿಗಳನ್ನು ದಕ್ಷಿಣ ಭಾರತದ ಎಲ್ಲ ಕಡೆಗೂ ಕಳು ಹಿಸಿ ಕೊಡಲಾಯಿತು. ಪ್ರದರ್ಶನದ ವ್ಯವಸ್ಥೆಗೆ ಸಂಬಂಧಪಟ್ಟ ಪೂರ್ವಭಾವಿ ಸಭೆಗಳನ್ನು ರಂಗಾ ಚಾರ್ಲು ಮೆಮೊರಿಯಲ್ ಹಾಲ್‌ನಲ್ಲಿ ಮಧ್ಯಾಹ್ನ ಮೂರು ಗಂಟೆ ಸಮಯದಲ್ಲಿ ಆಗಾಗ್ಗೆ ನಡೆಸಲಾಗು ತ್ತಿತ್ತು.

ತಮ್ಮ ವಸ್ತುಗಳೊಡನೆ ಪ್ರದರ್ಶನದಲ್ಲಿ ಭಾಗವಹಿ ಸಲು ಬರುವವರ ಅನುಕೂಲಕ್ಕೆ ರೈಲಿನಲ್ಲಿ ಪುಕ್ಕಟೆಯಾಗಿ ಬಂದು ಹೋಗಲು ರೈಲ್ವೆ ಅಧಿಕಾರಿಗಳಿಗೆ ಸೂಚನೆ ಯನ್ನು ನೀಡಲಾಯಿತು.

ಮೈಸೂರು ಸಂಸ್ಥಾನದ ಎಲ್ಲಾ ಮೂಲೆ ಗಳಿಂದಲೂ ಮತ್ತು ಹೊರಗಿನ ಪ್ರದೇಶಗಳಿಂದಲೂ ರೈತರು, ವರ್ತಕರು, ಶಿಲ್ಪಿಗಳು, ಕೈಗಾರಿಕೋದ್ಯಮಿಗಳು ಮತ್ತಿತರರು ತಮ್ಮ ತಮ್ಮ ವಿಶೇಷ ವಸ್ತುಗಳೊಂದಿಗೆ ಬಂದು ಈ ಪ್ರದರ್ಶನದಲ್ಲಿ ಭಾಗವಹಿಸಿದರು. ಮುಖ್ಯ ವಾದ ಅಂಶವೆಂದರೆ ಬಂದವರಿಗೆ ಊಟ ಮತ್ತು ವಸತಿ ಗಳ ಜೊತೆಗೆ ತಮ್ಮ ತಮ್ಮ ಧರ್ಮಕ್ಕೆ ತಕ್ಕಹಾಗೆ ನಿತ್ಯ ಪೂಜೆ, ಪುನಸ್ಕಾರ ನಡೆಸಲು ಅನುಕೂಲವನ್ನೂ ಮಾಡಿ ಕೊಡಲಾಗಿದ್ದಿತು.

ಈ ಪ್ರದರ್ಶನವು ಗಾರ್ಡನ್‌ಪಾರ್ಕ್‌ನಲ್ಲಿದ್ದ ನ್ಯೂ ಪಬ್ಲಿಕ್ ಆಫೀಸ್ ಪಕ್ಕದಲ್ಲಿ ಸಮಮಟ್ಟದಲ್ಲಿದ್ದ ಎಪ್ಪತ್ತು ಸಾವಿರ ಚದರ ಅಡಿ ಆವರಣದಲ್ಲಿ—ಅಗಲ ೩೭೫ ಅಡಿ, ಉದ್ದ ೬೪೫ ಅಡಿ ಜಾಗದಲ್ಲಿ–ನಡೆಯಿತು. ಸದರೀ ಕಟ್ಟಡವನ್ನು ಬಿದರಿನ ಬೊಂಬು, ಸರ್ವೆ, ಅಡಿಕೆ ಮರ, ಬಿದರಿನ ಚಾಪೆ ಮತ್ತು ಜಡೆಯ ಹಾಗೆ ಹೆಣೆದ ತೆಂಗಿನ ಗರಿಗಳನ್ನು ಉಪಯೋಗಿಸಿ ನಕ್ಷೆ ಪ್ರಕಾರ ಹಂಗಾಮಿಯಾಗಿ ನಿರ್ಮಿಸಲಾಯಿತು. ಪ್ರವೇಶ ದ್ವಾರ ವನ್ನು ಬಣ್ಣ ಬಣ್ಣದ ಲಾಂಗ್ ಕ್ಲಾತ್ ಬಟ್ಟೆಗಳಿಂದ ಸಿಂಗರಿಸಲಾಗಿದ್ದಿತು. ಕಳ್ಳಕಾಕರು ಒಳಕ್ಕೆ ಬರದಂತೆ ಪೂರ್ತಿ ಕಟ್ಟಡವನ್ನು ಭದ್ರವಾಗಿ ಕಟ್ಟಲಾಗಿತ್ತು. ಮುಖ್ಯ ದ್ವಾರವನ್ನು ಕೋಟೆಯ ಬಾಗಿಲಿನ ಹಾಗೆ ಮೂವತ್ತೆಂಟು ಅಡಿ ಎತ್ತರದ ಎರಡು ಗೋಪುರ ಆಕಾರದಲ್ಲಿ ನಿರ್ಮಿಸಲಾಯಿತು. ಮುಂಭಾಗದ ಪಕ್ಕ ದಲ್ಲಿ ಎರಡು ಕೊಠಡಿಗಳನ್ನೂ, ಒಳಭಾಗದಲ್ಲಿ ಷೆಡ್ಡು ಗಳನ್ನೂ ಭದ್ರವಾಗಿ ಕಟ್ಟಲಾಯಿತು.

೧೮೮೮ನೇ ಅಕ್ಟೋಬರ್ ೧೦ನೇ ತಾರೀಕು ನವ ರಾತ್ರಿ ಹಬ್ಬ ಕೊನೆಗೊಂಡಿತು. ಹಬ್ಬ ಮುಗಿದ ಆರು ದಿವಸಗಳ ನಂತರ ಅಂದರೆ ೧೬ ರಂದು ಮಂಗಳವಾರ ಬೆಳಗ್ಗೆ ೮ ಗಂಟೆಗೆ ಚಾಮರಾಜ ಒಡೆಯರ್ ಅವರು ದಿವಾನ್ ಕೆ. ಶೇಷಾದ್ರಿ ಅಯ್ಯರ್, ರೆಸಿಡೆಂಟ್ ಸರ್ ಹ್ಯಾರಿ ಪ್ರೆಂಡಾಲ್ ಗಾಸ್ಟ್ ಮತ್ತಿತರರ ಸಮ್ಮುಖದಲ್ಲಿ ಪ್ರದರ್ಶನವನ್ನು ವಿದ್ಯುಕ್ತವಾಗಿ ಉದ್ಘಾಟಿಸಿದರು. ಈ ಪ್ರದರ್ಶನಕ್ಕೆ ಪ್ರವೇಶವನ್ನು ಟಿಕೆಟ್ ಮೂಲಕ ನಿಗದಿ ಪಡಿಸಲಾಗಿದ್ದಿತು.

ಪ್ರದರ್ಶನಾಲಯವನ್ನು ಎ.ಬಿ.ಸಿ.ಡಿ.ಇ.ಎಫ್.ಜಿ ಎಂದು ಏಳು ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಮುಂಭಾಗದ ಎರಡು ಕೊಠಡಿಗಳಲ್ಲಿ ಅರಮನೆಯಿಂದ ಬಂದ ವಿಶೇಷವಾದ ಹಾಗೂ ಹೆಚ್ಚು ಬೆಲೆಯುಳ್ಳ ಮತ್ತು ಅಮೂಲ್ಯವಾದ ವಸ್ತುಗಳನ್ನು ಪ್ರದರ್ಶಿಸಲಾಗಿತ್ತು. 'ಎ' ವಿಭಾಗದಲ್ಲಿ ಕುಣಿಗಲ್ ಫಾರಂನಿಂದ ತರಿಸಿದ ಕುದುರೆಗಳು ಮತ್ತು ಇತರ ಕಡೆಯ ಕುದುರೆಗಳು, ಅಮೃತ ಮಹಲ್, ನೆಲ್ಲೂರು, ಮಹಾರಾಜರಿಂದ ಜಾನುವಾರುಗಳು, ನೀಲಗಿರಿ ಮತ್ತು ಇತರ ಕಡೆಗಳಿಂದ ಬಂದಿದ್ದ ಕುರಿ, ಮೇಕೆಗಳನ್ನು ಪ್ರದರ್ಶಿಸಲಾಗಿತ್ತು. 'ಬಿ' ವಿಭಾಗದಲ್ಲಿ ವ್ಯವಸಾಯೋತ್ಪನ್ನಗಳನ್ನು ಅಂದರೆ ಹೊಲದಲ್ಲಿ ಬೆಳೆಯುವ ಬೆಳೆಗಳು ನವಣೆ, ಸಾಮೆ, ಸಜ್ಜೆ, ರಾಗಿ, ಭತ್ತ, ಇತ್ಯಾದಿಗಳನ್ನು ಇಡ ಲಾಗಿತ್ತು. 'ಸಿ' ವಿಭಾಗದ ಮದರಾಸಿನ ಅಗ್ರಿಕಲ್ಚರಲ್ ಕಾಲೇಜಿನಿಂದ ಬಂದಿದ್ದ ವ್ಯವಸಾಯದ ಸಲಕರಣೆಗಳು, ಜಲಯಂತ್ರಗಳು, ಸಿಲ್ಕ್ ರೀಲಿಂಗ್ ಮಿಷನ್, ರಾಗಿ ಮಿಷನ್, ಇನ್ನೂ ಅನೇಕ ಯಂತ್ರ ಸಾಮಗ್ರಿಗಳು

ಸಂಗ್ರಹದಲ್ಲಿದ್ದವು. 'ಡಿ' ವಿಭಾಗದಲ್ಲಿ ಅಮೇರಿಕನ್, ಯೂರೋಪಿಯನ್ ಮತ್ತು ಸ್ಥಳೀಯ ನೇಗಿಲುಗಳು ಪ್ರದರ್ಶಿತವಾಗಿದ್ದವು. 'ಇ' ವಿಭಾಗದಲ್ಲಿ ಲಲಿತ ಕಲೆಗೆ ಸಂಬಂಧಿಸಿದ ವಸ್ತುಗಳನ್ನೂ ಇರಿಸಲಾಗಿತ್ತು. ಸೊರಬ ಮತ್ತು ಸಾಗರದ ಗಂಧ ಮತ್ತು ದಂತದ ಕೆಲಸಗಾರರಾದ ಗುಡಿಗಾರರೂ ಭಾಗವಹಿಸಿದ್ದರು. ಇವರು ಸಿದ್ಧಪಡಿಸಿದ ವಸ್ತುಗಳು ೧೮೮೩-೮೪ ರಲ್ಲಿ ಕಲ್ಕತ್ತ ಮತ್ತು ೧೮೮೬ರಲ್ಲಿ ಲಂಡನ್ನಿನಲ್ಲಿ ನಡೆದ ಪ್ರದರ್ಶನಗಳಲ್ಲಿ ಅಪಾರವಾದ ಮೆಚ್ಚುಗೆಯನ್ನು ಪಡೆದಿದ್ದವು. ಮೈಸೂರಿನ ಈ ಪ್ರದರ್ಶನದಲ್ಲಿ ಇತರ ಕೆತ್ತನೆಯ ವಸ್ತುಗಳನ್ನು ಮಾರಾಟಕ್ಕೂ ಏರ್ಪಾಟು ಮಾಡಿದ್ದರು. 'ಎಫ್' ವಿಭಾಗದ ಇಂಡಸ್ಟ್ರಿಯಲ್ ಆರ್ಟ್ಸ್ ಪ್ರದರ್ಶನದಲ್ಲಿ ಲೋಹ, ಗಾಜು, ಮರ, ಬೆತ್ತ ಮತ್ತು ಬಿದರಿನ ವಸ್ತುಗಳನ್ನು ಹಾಗೂ ವಿವಿಧ ತರಹೆಯ ಬಟ್ಟೆಗಳು, ಚರ್ಮದ ವಸ್ತುಗಳು, ಲೇಖನ ಸಾಮಗ್ರಿಗಳನ್ನು ಪ್ರದರ್ಶಿಸಲಾಗಿದ್ದಿತು. 'ಜಿ' ವಿಭಾಗದಲ್ಲಿ ಸುಂದರ ಎಲೆಗಳುಳ್ಳ (Foliage Plants) ಅಂದರೆ ಕ್ರೋಟನ್ ಇತ್ಯಾದಿಗಳಿದ್ದವು.

ಈ ರೀತಿಯಾಗಿ ಸುಮಾರು ಮೂವತ್ತು ಸಾವಿರಕ್ಕಿಂತಲೂ ಹೆಚ್ಚು ವಸ್ತುಗಳನ್ನು ಈ ಪ್ರದರ್ಶನದಲ್ಲಿ ಪ್ರದರ್ಶಿಸಲಾಗಿತ್ತು. ಪ್ರತಿಯೊಂದು ವಸ್ತುವನ್ನೂ ಅಚ್ಚುಕಟ್ಟಾಗಿ ಆಕರ್ಷಕವಾಗಿ ಜೋಡಿಸಲಾಗಿದ್ದಿತೆಂಬುದು ಗಮನಾರ್ಹ ಅಂಶ.

ಬೆಂಕಿಯ ಬಗ್ಗೆ ಮುನ್ನೆಚ್ಚರಿಕೆಯಾಗಿ ಮತ್ತು ನೀರಿನ ಅನುಕೂಲಕ್ಕಾಗಿ ವಸ್ತುಪ್ರದರ್ಶನದ ಕಟ್ಟಡದಿಂದ ಸ್ವಲ್ಪ ದೂರದಲ್ಲಿಯೇ ಇದ್ದ ಕುಕ್ಕರಹಳ್ಳಿಯ ಕೆರೆಯಿಂದ ನೀರು ಸರಬರಾಜಿನ ವ್ಯವಸ್ಥೆಯನ್ನು ಮಾಡಲಾಗಿದ್ದಿತು. ಮೈಸೂರು ಮುನಿಸಿಪಾಲಿಟಿಯವರು ಉಪಯೋಗಿಸುತ್ತಿದ್ದ ಕೆಲವು ನೀರಿನ ಗಾಡಿಗಳ ಸಹಾಯವನ್ನೂ ಪಡೆಯಲಾಗಿತ್ತು. ಆಗ ಮೈಸೂರಿನಲ್ಲಿದ್ದ ಹಿರಿಯ ಕೈಗಾರಿಕೋದ್ಯಮಿಯಾಗಿದ್ದ ಜೆ. ವ್ಯಾಲೆಸ್ ಎಂಬುವರಲ್ಲಿದ್ದ ಒಂದು ಸ್ಟೀಮ್ ಇಂಜಿನನ್ನು ಸಹಾಯವಾಗಿ ಪಡೆಯಲಾಗಿತ್ತು. ಈ ಇಂಜಿನ್ ಗಂಟೆಗೆ ಹತ್ತರಿಂದ ಹನ್ನೆರಡು ಮೈಲಿ ವೇಗವಾಗಿ ಚಲಿಸುವಂತಹದ್ದು. ಈ ವಾಹನಕ್ಕೆ ನಾಲ್ಕು ಪಟ್ಟೆಯ ಚಕ್ರಗಳಿದ್ದು ಹೋಗುವಾಗ 'ಗುಡು ಗುಡು' ಎಂದು ಶಬ್ದ ಮಾಡುತ್ತಿತ್ತು. ಈ ಚಲಿಸುವ ಇಂಜಿನ್ ಜೊತೆಗೆ ಸ್ಥಳದಲ್ಲೇ ಇರುವಂತಹ ಐದು ಫೈರ್ ಇಂಜಿನ್‌ಗಳೂ ಬೆಂಕಿ ಬಿದ್ದ ತಕ್ಷಣ ಉಪಯೋಗಿಸಲು ಇಟ್ಟಿದ್ದರು.

ಈ ಪ್ರದರ್ಶನ ನಡೆದ ಏಳು ದಿವಸಗಳಲ್ಲಿ ಎರಡು ದಿವಸ ಮಧ್ಯಾಹ್ನಾನಂತರ ಹೆಂಗಸರಿಗೆ ಮಾತ್ರ ಪ್ರವೇಶದ ವಿಶೇಷ ಏರ್ಪಾಡು ಮಾಡಲಾಗಿದ್ದಿತು.

ಪ್ರದರ್ಶನ ಆರಂಭವಾದ ನಂತರ ಮೂರನೇ ದಿವಸದ ಬೆಳಗ್ಗೆ ಪಕ್ಕದಲ್ಲೇ ಇದ್ದ ಬಯಲಿನಲ್ಲಿ ಸುಧಾರಿತ ನೇಗಿಲುಗಳಿಂದ ಉಳುವ ಸ್ಪರ್ಧೆಯನ್ನು ಏರ್ಪಡಿಸಲಾಗಿದ್ದಿತು. ಈ ವಿಶೇಷ ಪಂದ್ಯಾವಳಿಯನ್ನು ಚಾಮರಾಜ ಒಡೆಯರ್ ಅವರು ಸ್ವತಃ ವೀಕ್ಷಿಸಿ ನಂತರ ಅಲ್ಲಿ ಭಾಗವಹಿಸಿದ ರೈತರೊಡನೆ ನೇರವಾಗಿ ಮಾತುಕತೆ ನಡೆಸಿದರು. ಆಗಾಗ್ಗೆ ಇಂತಹ ಸ್ಪರ್ಧೆಗಳನ್ನು ನಡೆಸಬೇಕೆಂದು ತೀರ್ಮಾನಿಸಲಾಯಿತು.

ಜೈಲಿನ ಇನ್ಸ್‌ಪೆಕ್ಟರ್ ಜನರಲ್ ಅವರು ಜೈಲಿನಲ್ಲಿದ್ದ ನೂರೈವತ್ತು ಜನರನ್ನು ಪ್ರದರ್ಶನದ ಸಹಾಯಕ್ಕೆ ಕಳುಹಿಸಿ ಕೊಟ್ಟಿದ್ದರು. ಮತ್ತು ಅವರೇ ತಯಾರಿಸಿದ ಜಮಖಾನ ಮತ್ತು ಇತರೆ ವಸ್ತುಗಳು ಇಲ್ಲಿ ಪ್ರದರ್ಶಿತವಾಗಿದ್ದವು.

ಸೆಂಟ್ರಲ್ ಕಮಿಟಿ ಮತ್ತು ಡಿಸ್ಟ್ರಿಕ್ಟ್ ಕಮಿಟಿಗಳಲ್ಲಿ ಮುಖ್ಯರಾದ ಅರವತ್ತಾರು ಜನರನ್ನು ಪ್ರದರ್ಶನದ ತೀರ್ಪುಗಾರರನ್ನಾಗಿ ಆಯ್ಕೆ ಮಾಡಲಾಗಿದ್ದಿತು.

ಕಟ್ಟಡವನ್ನು ಪೂರ್ತ ಕಟ್ಟುವುದಕ್ಕೆ, ಮುಂಭಾಗವನ್ನು ಅಲಂಕರಿಸುವುದಕ್ಕೆ, ಬಹುಮಾನ ವಿತರಣೆಗೆ, ಜಾಹೀರಾತು ಪತ್ರಿಕೆಗೆ ಮತ್ತು ಲೇಖನ ಸಾಮಗ್ರಿಗಳಿಗೆ, ಕೆಲಸ ಮಾಡಿದವರಿಗೆ ಕೂಲಿ ಮತ್ತು ಇತರೆ ಬಾಬ್ತುಗಳಿಗಾಗಿ, ಒಟ್ಟಿನಲ್ಲಿ ಪೂರ್ತ ಪ್ರದರ್ಶನಕ್ಕೆ ಆದ ಖರ್ಚು ರೂ. ೨೨,೦೦೦. ಸರ್ಕಾರ ಸಹಾಯ ಧನ ರೂ. ೧೯,೦೦೦. ಟಿಕೆಟ್ ಮೂಲಕ ಸುಮಾರು ರೂ. ೨.೦೦೦. ಪ್ರದರ್ಶನ ಮುಗಿದ ನಂತರ ಕಟ್ಟಡವನ್ನು ಹರಾಜು ಹಾಕಿದ್ದಕ್ಕೆ ಬಂದದ್ದು ರೂ. ೩,೦೦೦. ಹೀಗೆ ಒಟ್ಟು

ರೂ. ೨೪,೦೦೦ ಉತ್ಪತ್ತಿಯಾಗಿ ಇದರಲ್ಲಿ ಇನ್ನೂ ೨,೦೦೦ ರೂಪಾಯಿ ಉಳಿತಾಯವಾಯಿತು.

ಮೊದಲನೆಯ, ಎರಡನೆಯ ಮತ್ತು ಮೂರನೆಯ ಬಹುಮಾನಗಳನ್ನು ೨ ರೂಪಾಯಿಗಳಿಂದ ೫೦ ರೂಪಾಯಿಗಳವರೆಗೆ ನಗದಾಗಿ ಕೊಡಲಾಯಿತು. ಚಿನ್ನ, ಬೆಳ್ಳಿ ಮತ್ತು ತಾಮ್ರದ ಫಲಕಗಳನ್ನು ನೀಡಲಾಯಿತು. ಒಂದೇ ಒಂದು ಚಿನ್ನದ ಫಲಕ ಮಾತ್ರ ಲಭಿಸಿತು. ಜೊತೆಗೆ ವಿಶೇಷ ಬಹುಮಾನಗಳನ್ನೂ ಕೊಡಲಾಯಿತು. ಮೈಸೂರಿನ ಶ್ರೀಮತಿ ಹಾಕನ್ ಎಂಬಾಕೆ ಪ್ರದರ್ಶಿಸಿದ ಬೆಣ್ಣೆ ಮತ್ತು ತುಪ್ಪಕ್ಕೆ ಮೊದಲ ವಿಶೇಷ ಬಹುಮಾನ ಮತ್ತು ಕೋಲಾರದ ಮಿಸ್ ಆನ್ ಸ್ಟೀ ಎಂಬಾಕೆ ಪ್ರದರ್ಶಿಸಿದ ರಾಗಿ ಬೀಸುವ ಯಂತ್ರಕ್ಕೆ ಈ ಬಹುಮಾನಗಳು ಲಭಿಸಿದವು.

ಪ್ರದರ್ಶಿತವಾದ ಕೆಲವು ವಸ್ತುಗಳ ಬಗ್ಗೆ ತೀರ್ಪುಗಾರರು ಮಾಡಿದ ವಿಮರ್ಶೆಯ ಪ್ರಕಾರ, ಈ ಪ್ರದರ್ಶನದಲ್ಲಿ ಪಾರಿವಾಳದ ಮೊಟ್ಟೆಯ ಗಾತ್ರದಿಂದ ಮನುಷ್ಯನ ತಲೆಯ ಗಾತ್ರದವರೆಗಿನ ತೆಂಗಿನಕಾಯಿಗಳಿದ್ದವು. ಸುಮಾರು ೧೮೦೮ರಲ್ಲಿ ಬ್ರಿಟಿಷ್ ಸೈನ್ಯದ ತುಕಡಿಯ ಅಧಿಕಾರಿಗಳಾದ ಕೇಪ್ಸ್ ಮತ್ತು ವಿಕನ್‌ಸನ್ ಅವರು ಚಿಕ್ಕಬಳ್ಳಾಪುರದ ನಂದಿ ಗ್ರಾಮದ ಬಳಿ ಮೊಕ್ಕಾಂ ಹಾಕಿದ್ದಾಗ, ತಮ್ಮ ಜೊತೆಯಲ್ಲಿ ಇಂಗ್ಲೆಂಡಿನಿಂದ ತಂದಿದ್ದ ನಿಂಬೆಹಣ್ಣುಗಳ ಗಾತ್ರದ ಇಪ್ಪತ್ತು ಮೂವತ್ತು ಆಲೂಗಡ್ಡೆಗಳನ್ನು ಅಲ್ಲಿನ ಸ್ಥಳೀಯ ರೈತರಿಗೆ ಕೊಟ್ಟು ಬೆಳಸಿದಾಗ ಸುಮಾರು ಮೂವತ್ತು ಮಣ ಆಲೂಗಡ್ಡೆ ಬೆಳೆಯಿತಲ್ಲದೆ ಒಂದೊಂದು ಆಲೂಗಡ್ಡೆಯ ತೂಕ ನಲವತ್ತು ತೊಲ ಭಾರವಿದ್ದಿತು. ಮೈಸೂರು ಡಿಸ್ಟ್ರಿಕ್ಟ್‌ನ ಸಾಲಹಳ್ಳಿಯಲ್ಲಿ ೧೮೪೭ರಲ್ಲಿ ಪ್ರಾರಂಭವಾದ ಅಷ್ಟಗ್ರಾಮ ಶುಗರ್ ಕಾರ್ಖಾನೆಯಲ್ಲಿ ತಯಾರಿಸಲಾಗಿದ್ದ ಸಕ್ಕರೆಗೆ ಅಷ್ಟಗ್ರಾಮ ಸಕ್ಕರೆ ಎಂದು ಕರೆಯುತ್ತಿದ್ದರು. ಲಂಡನ್, ಪ್ಯಾರಿಸ್ ಮತ್ತು ಇತರೆ ಕಡೆಗಳಲ್ಲಿ ನಡೆದ ಎಲ್ಲಾ ವಸ್ತುಪ್ರದರ್ಶನಗಳಲ್ಲಿಯೂ ಭಾಗವಹಿಸಿ ಬಹುಮಾನ ಗಳಿಸಿತ್ತು.

ಪ್ರದರ್ಶನ ಮುಗಿದ ನಂತರ, ಶಿವಮೊಗ್ಗ ಡಿಸ್ಟ್ರಿಕ್ಟ್ ಡೆಪ್ಯೂಟಿ ಕಮೀಷನರ್ ಹಾಗೂ ಅದೇ ಡಿಸ್ಟ್ರಿಕ್ಟ್ ಕಮಿಟಿ ಅಧ್ಯಕ್ಷರಾಗಿದ್ದ ವಿ.ಪಿ. ಮಾಧವರಾವ್ ಅವರು ಕೆತ್ತನೆ ಕೆಲಸದ ಗುಡಿಗಾರರನ್ನು ಅರಮನೆಗೆ ಮಹಾರಾಜರ ಸಮ್ಮುಖಕ್ಕೆ ಕರೆದುಕೊಂಡು ಹೋಗಿ ಪರಿಚಯಿಸಿದರು. ಮಹಾರಾಜರು ಹೊರ ದೇಶಗಳಲ್ಲಿಯೂ ಇವರ ಕೃತಿಗಳು ಹೆಸರುವಾಸಿಯಾಗಲೆಂದು ಹಾರೈಸಿ ಒಂದೊಂದು ಜೊತೆ ಶಾಲುಗಳನ್ನು ಹೊದಿಸಿ ಗೌರವದಿಂದ ಕಳುಹಿಸಿ ಕೊಟ್ಟರಲ್ಲದೆ, ಕೆಲವು ಕೃತಿಗಳನ್ನು ಅರಮನೆಗೆ ಖರೀದಿಸಿದರು.

ಪ್ರದರ್ಶನದಲ್ಲಿ ಭಾಗವಹಿಸಿದ್ದವರಿಗೆ ಬಹುಮಾನ ವಿತರಣೆ, ಪ್ರದರ್ಶನ ಮುಗಿದ ಕೆಲವು ದಿನಗಳ ನಂತರ ಆಯಾ ಡಿಸ್ಟ್ರಿಕ್ಟ್ ಕಮಿಟಿಯವರಿಗೆ ಕಳುಹಿಸಿ ಅವರವರ ಬಹುಮಾನಗಳನ್ನು ಅಲ್ಲಲ್ಲೇ ವಿತರಣೆ ಮಾಡಲಾಯಿತು. ಮೈಸೂರು ಸಂಸ್ಥಾನದ ಹೊರಗಡೆಯಿಂದ ಬಂದಿದ್ದವರಿಗೆ ಅವರವರ ವಿಳಾಸಕ್ಕೆ ಕಳುಹಿಸಿಕೊಡಲಾಯಿತು. ಪ್ರದರ್ಶನ ಮುಗಿದ ಒಂದು ವಾರದ ನಂತರ ಕಟ್ಟಡವನ್ನು ಹರಾಜು ಹಾಕಿದ್ದರಿಂದ ೩,೦೦೦ ರೂಪಾಯಿ ಹಣ ಗಳಿಸಿತು. ೨೯–೧೧–೧೮೮೮ ರಂದು ಬೆಂಗಳೂರಿನ ಪಬ್ಲಿಕ್ ಆಫೀಸ್‌ನಲ್ಲಿ ಅಂದರೆ ಅಠಾರ ಕಚೇರಿಯಲ್ಲಿ ಸೆಂಟ್ರಲ್ ಕಮಿಟಿಯವರೆಲ್ಲರೂ ಸಭೆ ಸೇರಿ ಪ್ರದರ್ಶನದ ಕಾರ್ಯವನ್ನು ಮುಕ್ತಾಯಗೊಳಿಸಿದರು.

## ಗ್ರಂಥ ಋಣ


೧. ಎಮ್.ಕೆ. ಲಿಂಗಯ್ಯ : ಮೈಸೂರು ಒಂದು ಅಧ್ಯಯನ, ೧೯೮೨

೨. ಮೈಸೂರು ಗೆಜೆಟ್, ೧೮೮೮

೩. ಎಮ್. ಶಿಂಗ್ರಯ್ಯ : ಚಾಮರಾಜ ಒಡೆಯರ್‌ರವರ ಚರಿತ್ರೆ, ೧೯೦೫

೪. J. Cameron and S.A. Bapu Rao : *Report on Agricultural and Industrial Exhibition*, Mysore, 1888

೫. *Report on the Administration of Mysore for the Year 1886-87 To 1890-91*

೬. *Mysore Blue Book Journal*, Vol. 6, 1919-20

೭. M. Shama Rao : *Modern Mysore*, Vol. 2, 1930